ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಶುಕ್ರವಾರ, ದಿನಾಂಕ: 25ನೇ ಸೆಪ್ಟಂಬರ್, 2020

ಮಹಿಳೆಯರ ಆರ್ಥಿಕ ಸಬಲೀಕರಣ ಕುರಿತು

ಶ್ರೀ ಯು.ಬಿ. ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು):-

718 (670) ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಕಳೆದ ಮೂರು ವರ್ಷಗಳಿಂದ ಮಹಿಳೆಯರ ಆರ್ಥಿಕ ಸಬಲೀಕರಣ ಸಲುವಾಗಿ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮಕ್ಕೆ ಸರ್ಕಾರ ಒದಗಿಸುತ್ತಿರುವ ಅನುದಾನವೆಷ್ಟು ;

(ಆ) ಸದರಿ ಅನುದಾನದ ಮೂಲಕ ಮಹಿಳೆಯರ ಆರ್ಥಿಕ ಸಬಲೀಕರಣಕ್ಕಾಗಿ ಯಾವ ಯಾವ ಯೋಜನೆಗಳನ್ನು ಜಾರಿಗೊಳಿಸಲಾಗಿದೆ ;

(ಇ) ಯಾವ ಯೋಜನೆಗಳು ಹೆಚ್ಚು ಸಫಲತೆಯನ್ನು ಹೊಂದಿವೆ ಮತ್ತು ಯಾವ ಯೋಜನೆಗಳು ನಿಷ್ಕ್ರಿಯಗೊಂಡಿವೆ ;

(ಈ) ಕಳೆದ ಮೂರು ವರ್ಷಗಳಲ್ಲಿ ಆರ್ಥಿಕ ಸ್ವಾವಲಂಬನೆಯನ್ನು ಹೊಂದಿರುವಂತ ಮಹಿಳೆಯರ ಸಂಖ್ಯೆ ಮತ್ತು ಯೋಜನೆಗಳ ವಿವರಗಳೇನು ? (ಜಾತಿವಾರು ಮತ್ತು ಜಿಲ್ಲಾವಾರು ಮಾಹಿತಿ ನೀಡುವುದು)